ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 19 ನೇ ಮಾರ್ಚ್, 2020

ಬೀದರ್ ಜಿಲ್ಲೆಯ ಸಣ್ಣ ನೀರಾವರಿ ಯೋಜನೆ ಬಗ್ಗೆ

ಶ್ರೀಅರವಿಂದಕುಮಾರ್ಅರಳಿ(ವಿಧಾನಸಭೆಯಿಂದಚುನಾಯಿತರಾದವರು):-

1257 (1514) ಮಾನ್ಯ ಕಾನೂನು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಹಾಗೂ ಸಣ್ಣ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಸಣ್ಣ ನೀರಾವರಿ ಇಲಾಖೆಯಲ್ಲಿರುವ ವಿವಿಧ ಯೋಜನೆಗಳಾವುವು; ಬಿಡುಗಡೆ ಮಾಡಲಾದ ಅನುದಾನ ಎಷ್ಟು ; ಜಿಲ್ಲಾವಾರು, ಯೋಜನಾವಾರು ವಿವರ ನೀಡುವುದು ; (ಬೀದರ್ ಜಿಲ್ಲೆಯ ತಾಲ್ಲೂಕುವಾರು ಫಲಾನುಭವಿಗಳವಾರು, ಯೋಜನಾವಾರು ಪ್ರತ್ಯೇಕ ವರದಿ ನೀಡುವುದು)

(ಆ) ಬೀದರ್ ಜಿಲ್ಲೆಯಲ್ಲಿ ಕಳೆದ ವರ್ಷದಿಂದ ಇಲ್ಲಿಯವರೆಗೆ ಎಷ್ಟು ಚೆಕ್ ಡ್ಯಾಂಗಳನ್ನು ಮಂಜೂರು ಮಾಡಲಾಗಿದೆ ; ಪ್ರತಿ ಚೆಕ್ ಡ್ಯಾಂಗಳಿಗೆ ಬಿಡುಗಡೆಯಾದ ಅನುದಾನವೆಷ್ಟು ; ಮತ್ತು ಇವುಗಳಲ್ಲಿ ಎಷ್ಟು ಪೂರ್ಣಗೊಂಡಿವೆ ; ಹಾಗೂ ಅಪೂರ್ಣಗೊಂಡ ಚೆಕ್ ಡ್ಯಾಂಗಳೆಷ್ಟು ; ಇದಕ್ಕೆ ಕಾರಣವೇನು ; (ತಾಲ್ಲೂಕುವಾರು ವಿವರ ನೀಡುವುದು)

(ಇ) ಬೀದರ್ ಜಿಲ್ಲೆಯಲ್ಲಿ ಚೆಕ್ ಡ್ಯಾಂ ಕಾಮಗಾರಿಗಳಲ್ಲಿ ಅವ್ಯವಹಾರ ನಡೆದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ; ಬಂದಿದ್ದಲ್ಲಿ, ಯಾವ ಕ್ರಮ ಕೈಗೊಳ್ಳಲಾಗಿದೆ ? (ವಿವರ ನೀಡುವುದು)